ಪ್ರೊ|| ಎಚ್. ಆರ್. ರಘುನಾಥಭಟ್*

# ವರುಣದಲ್ಲಿ ಶಾಸನಸ್ಥ ಶಿಲ್ಪ ಶೋಧನೆ

ಕಳೆದ ಹದಿಮೂರು ವರ್ಷಗಳ ಸತತ ಪ್ರಯತ್ನ (೧೯೮೧–೧೯೯೪), ಸ್ಥಳೀಯ ಸುಬ್ಬಣ್ಣ–ನಂಜುಂಡ ಸ್ವಾಮಿ–ಭಟ್‌ಸೂರಿ ಇವರ ಸಹಕಾರಗಳ ಫಲವಾಗಿ ವರುಣದಲ್ಲಿ ಶಾಸನಸ್ಥ ಶಿಲ್ಪದ ಶೋಧನೆ ಸಾಧ್ಯವಾಯಿತು. ಆಳೆತ್ತರದ ಭಗವತೀ ಉಬ್ಬುಶಿಲ್ಪ ಮೈಸೂರು ಬಳಿ ಪತ್ತೆಯಾದದ್ದು ನಮ್ಮ ಕುತೂಹಲವನ್ನು ಕೆರಳಿಸುತ್ತದೆ. ಇಷ್ಟು ದೊಡ್ಡ ಭಗವತಿಯ ಶಿಲಾಶಿಲ್ಪವೊಂದು ತನ್ನ ಪ್ರತಿಷ್ಠಾಪನಾ ಶಾಸನವನ್ನು ಒಳಗೊಂಡು ಗೋಚರಿಸುತ್ತಿರುದೂ ಇದೇ ಮೊದಲ ಬಾರಿಗೆಂಬುದೂ ಗಮನಾರ್ಹ. ಆ ಶಾಸನ ಪಾಠವನ್ನು ಸಧ್ಯಕ್ಕೆ ಹೀಗೆ ಓದಲಾಗಿದೆ :

೧ ಶ್ರೀ ಎಳ ಆರಟ್ಟಿಗಳಾ
೨ ಮಗನ್ದಿ ಭ್ರ್ಭಗವದ್ದೇ
೩ ವಕ್ಕ್ರ್ಟಟ್ಟಿಸಿ ಕಿಱುಮಾ
೪ ಟಿ ತಟವನ್ದ ಸಮೇತಂ
೫ ಬಾಳಿಪ್ಪೋರ್ [॥*]

[ಶ್ರೀ ಎಳಾ ಆರಟ್ಟಿಗಳ ಮಗನು, ಭಗವತಿಯಾಲಯ (?) ಕಟ್ಟಿಸಿ, ಕಿರುಮಾಳ ಚಿಕ್ಕಭೂಮಿ ದಾನ, ತಟವಂದ (ಕೆರೆದೆರೆ) ಸಹಿತವಾಗಿ ಪರಿಪಾಲಿಸುತ್ತಿರುವನು ಶ್ರೀ]

ಜನಪದ ಗ್ರಾಮೀಣ ಶೈಲಿಯ ಈ ಶಿಲ್ಪವು ಎಂಟನೆಯ ಶತಮಾನದ ಗಂಗಾಧೀನ ಆರಟ್ಟಿ ಅರಸು ಮನೆತನದ ಒಂದು ಕೊಡುಗೆಯಾಗಿ ನಮ್ಮ ಕಣ್ಮುಂದಿದೆ. ಆದರ ದರ್ಶನ ಮಾತ್ರ ಹನ್ನೆರಡು ವರ್ಷಕ್ಕೊಂದು ಸಲ! ತಲಕಾಡಿನ ಪಂಚಲಿಂಗ ದರ್ಶನವಾಗುವ ವರ್ಷ ಗುಡಿಯ ಬಾಗಿಲು ತೆಗೆಯುತ್ತಾರೆ. ಆ ಸಮಯದಲ್ಲಿ (ತಿಂಗಳ ನಾಲ್ಕು ಮಂಗಳವಾರ ಮಾತ್ರ) ವಿಶೇಷ ಪೂಜೆ, ಹರಕೆ, ಆರಾಧನೆ ನಡೆಯುತ್ತದೆ. ಇದಕ್ಕಾಗಿ ಸಿದ್ಧಪಡಿಸಿದ ಎಲ್ಲ ವಸ್ತು ವಿಶೇಷಗಳೂ ಹೊಚ್ಚ ಹೊಸದಾಗಿರಬೇಕು. ಆಗ ತಾನೆ ತೋಟದಿಂದ ಕಿತ್ತು ತಂದ ಬಾಳೆಗೊನೆ, ತೆಂಗು, ಜೇನು, ಎಳ್ಳು, ಬತ್ತ ಇತ್ಯಾದಿ ತಂದು ತಮ್ಮಡಿಗಳು ಅಲ್ಲೆ ಚರುವನ್ನು ಸಿದ್ಧ ಮಾಡಿ ಭಯಭಕ್ತಿಯಿಂದ ಆರಾಧನೆ ಮಾಡುತ್ತಾರೆ. ದೂರದ ಭಕ್ತರೂ ಬಂದು ತಮ್ಮ ಪೂಜೆ ಸಲ್ಲಿಸುತ್ತಾರೆ. ಭಯಂಕರವಾದ ಈ ಭಗವತಿಯ ಆರಾಧನೆಯಲಿ ತುಸು ವ್ಯತ್ಯಯವುಂಟಾದರೂ ಕೇಡು ಕಟ್ಟಿಟ್ಟದ್ದೆ, ಊರಿಗೂ ಕೇಡು ಎಂಬ ನಂಬಿಕೆ ಅಲ್ಲಿ ಜನಮನದಲ್ಲಿ ಆಳವಾಗಿವೆ. ಈ ಗ್ರಾಮ ಗುಡಿಯೆದುರಿಗೆ ಒಂದು ಪ್ರಾಚೀನ ವೃಕ್ಷವಿದೆ. ಅದು ಯಾವ ಜಾತಿಗೆ ಸೇರುತ್ತದೆ ಎಂಬುದು ಯಾರಿಗೂ ಗೊತ್ತಿಲ್ಲವಂತೆ.

ವರುಣದ ಶಾಸನಸ್ಥ ಭಗವತಿ ಕಣಶಿಲೆಯ ಚಪ್ಪಟೆ ಶಿಲ್ಪ ಕೆತ್ತನೆಯಾಗಿದೆ. ಜಾನಪದ ಶೈಲಿಯಲ್ಲಿ ತೆಳು ಉಬ್ಬು ಮಾದರಿಯಲ್ಲಿರುವ ಈ ಶಿಲ್ಪಕ್ಕೆ (೧೬೮ × ೧೦೦ ಸೆಂ.ಮೀ.) ಪ್ರಭಾವಳಿಯಿಲ್ಲ; ಮೇಲ್ತುದಿಯಲ್ಲಿ ಹೂಬಳ್ಳಿ ಕುಚ್ಚಗಳನ್ನು ಕೆತ್ತಲಾಗಿದೆ. ದೊಡ್ಡ ಕೋಲುಮುಖ, ಕಿರೀಟ ಮುಕುಟ, ಉದ್ದಕಿವಿ ಕರ್ಣಕುಂಡಲ, ಚಪ್ಪಟೆ

* ಪ್ರೊಫೆಸರ್, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ಇಲಾಖೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

ಯಾದ ಮೊಗ್ಗು ಮೂಗು, ಉದ್ದನೆಯ ದೊಡ್ಡ ಕಣ್ಣು, ದಪ್ಪ ಹುಬ್ಬು ಗಂಭೀರ ಮುಖಭಾವ ಎದ್ದು ಕಾಣುವ ಕೆಲವು ಶಿಲ್ಪ ಲಕ್ಷಣಗಳಾಗಿವೆ. ದೊಡ್ಡ ತಾಳಿಸರ, ಸಣ್ಣ ಮಣಿಸರ, ಸರಿಗೆಸರ, ರತ್ನಪದಕದ ಸರ, ಕೈಬಳೆ, ಬುಜ ಬಂಧ, ಟೊಂಕಪಟ್ಟಿ, ಅದಕ್ಕೆ ನಾಲ್ಕು ಉದ್ದದ ಮಣಿಸರ ಇಳಿಬಿಟ್ಟಿದ್ದು ತುದಿಯಲ್ಲಿ ಅರಳಿಪತ್ರ ತೂಗುಬಿಟ್ಟಿದೆ, ಬದಿಯಲ್ಲಿ ಮತ್ತೆ ನಾಲ್ಕಳೆ ಮಣಿಸರ ತುದಿಯಲ್ಲಿ ಗೊಂಡೆ ಕುಚ್ಚು, ಕಾಲಿಗೆ ಕಾಲ್ಕಡಗ ಈ ಎಲ್ಲ ಆಭರಣಗಳನ್ನು ತೆಳು ಉಬ್ಬು ಶಿಲ್ಪತಂತ್ರಕ್ಕನುಗುಣವಾಗಿ ಕೆತ್ತಲಾಗಿದೆ. ಹಲವು ಲಂಬಾಂತರ ಮಡಿಕೆಗಳಿಂದ ಕೂಡಿದ ಲಂಬಾಣಿ ಲಂಗದಂತಹ ವಸ್ತ್ರ ಧರಿಸಿದ ಈ ಭಗವತಿಯ ಪಾದಗಳು ಶಿಲ್ಪದ ಪ್ರಮಾಣಕ್ಕನುಸಾರವಾಗಿಲ್ಲ. ಎಂಟು ಕೈಗಳಲ್ಲಿ ಪ್ರಧಾನ ಭುಜಗಳು ದೊಡ್ಡದಾಗಿದ್ದರೆ, ಉಳಿದವು ಚಿಕ್ಕ ದಾಗಿವೆ. ಬಲಕೈಗಳಲ್ಲಿ ಚಕ್ರ, ಬಾಣಗಳ ಕಟ್ಟು, ದಪ್ಪ ದಂಡದ ತ್ರಿಶೂಲ, ಕಠಾರಿ, ಎಡಕೈಗಳಲ್ಲಿ ಶಂಖ, ದೊಡ್ಡ ಬಿಲ್ಲು, ಡಾಲು ಮತ್ತು ಚಿಕ್ಕ ವಜ್ರಾಯುಧಗಳಿವೆ. ಮಹಿಷವಾಹನ ಚಿಕ್ಕದಾಗಿದೆ. ದಪ್ಪ ಚಂದ್ರಾಕೃತಿಯ ಕೊಂಬು, ಕೆಳಮುಖ ಮಾಡಿ ಸೋತು ಮಲಗಿದ ಮುಖ ಭಾವ, ಬಾಯಿ ತೆರೆದು ನೆಲ ಕಚ್ಚಿದಂತೆ ಶಿಲ್ಪಿಸಿದ್ದನ್ನು ನೋಡಿದರೆ ಸೋಲಿನ ಸಂಕೇತ ಸ್ಪಷ್ಟವಾಗುತ್ತದೆ. ಈ ಶಿಲ್ಪದ ಒಟ್ಟು ಶೈಲಿ ಗಂಗರ ಇತರ ಶಾಸನಸ್ಥ ಶಿಲ್ಪಗಳ ಜೊತೆ ತುಲನೆ ಮಾಡುವಂತಿದೆ. ಇದು ಗಂಗ ಶಿಲ್ಪಕಲೆಯ ಒಂದು ವೈಶಿಷ್ಟ್ಯವೂ ಹೌದು. ಇದನ್ನು "ದೇಸೀ ಶೈಲಿ" ಎನ್ನೋಣ. ಇನ್ನೊಂದು ವೈಶಿಷ್ಟ್ಯವೆಂದರೆ ಗಂಗರ ಆಶ್ರಯದಲ್ಲಿ ಬೆಳೆದು ಬಂದ "ಮಾರ್ಗಶೈಲಿ" ವರುಣ ದಲ್ಲಿರುವ ಚಾಮುಂಡಿ, ಮಹಿಷಾಸುರ ಮರ್ದಿನಿ, ಸಪ್ತಮಾತೃಕೆ ಶಿಲ್ಪಗಳನ್ನು ಉದಹರಿಸಬಹುದು.

ಸುಮಾರು ಏಳು ಶತಕದ (ಕ್ರಿ.ಶ. ೩–೧೦ನೆಯ ಶತಮಾನ) ಗಂಗರ ಆಳ್ವಿಕೆಯಲ್ಲಿ ಪ್ರಾಚೀನ ರೂಪಣ ಯುಗ ಮತ್ತು ಸಾಮ್ರಾಜ್ಯಯುಗಗಳ ವಿಲೀನವಾಗಿರುವು ದಷ್ಟೇ ಅಲ್ಲ, ಗ್ರಾಮೀಣ ನೆಲೆಯಲ್ಲಿ ನಾಗರಿಕ ನೆಲೆ ಕಾಲ ಕ್ರಮೇಣ ಸಂಯೋಜನೆಗೊಂಡದ್ದನ್ನೂ ನಾವು ನೋಡ ಬಹುದಾಗಿದೆ. ಗಂಗರ ಕಾಲದ ಗ್ರಾಮದೇವಿಯರಾದ ಮಾರಮ್ಮ, ಪಟ್ಟಲದಮ್ಮ, ಕೋಲಾರಮ್ಮ, ಬಳಗೆರೆ ದೇವಮ್ಮ ಮುಂತಾದವರೊಟ್ಟಿಗೆ ಅಥವಾ ಅವರೇ ಸಪ್ತಮಾತೃಕೆ, ದುರ್ಗಾ, ಮಹಿಷಾಸುರಮರ್ದಿನಿಯರಾಗಿ ಶಿಷ್ಟರೂಪ ತಾಳಿ ಬೆಳೆಯಿತು. ಹಲವೆಡೆ ಈ ಬಗೆಯ ಶಿಲಾಮೂರ್ತಿಗಳನ್ನು ಪ್ರತಿಷ್ಠಾಪಿಸಿ ಪ್ರತ್ಯೇಕ ಗುಡಿ–ದೇಗುಲಗಳನ್ನು ಕಟ್ಟಿ ಜಾತ್ರೆ, ಉತ್ಸವಗಳನ್ನು ನಡೆಸಿದ್ದರು.

ನಮ್ಮ ನಾಡಿನ ಪ್ರಾಚೀನ ಅರಸುಮನೆತನಗಳಲ್ಲಿ ಸಾತವಾಹನ, ಕದಂಬ, ಚಾಲುಕ್ಯರು ಹಾರೀತಿಪುತ್ರರಾಗಿದ್ದಂತೆ, ಸಪ್ತಮಾತೃಕೆಯಾರಾಧಕರೂ ಆಗಿದ್ದರು. ಗಂಗ ದುರ್ವಿನೀತ ಕಾತ್ಯಾಯನೀ (ಕಮಲೋದರ) ಭಕ್ತನಾಗಿದ್ದ. ಆ ಕಾಲದ ಶಾಸನಗಳಲ್ಲಿ ಭಗವತೀ ಪ್ರಸ್ತಾಪ ಬರುತ್ತದೆ. ಗಂಗರ ಅಧೀನ ಅರಸರಾದ ಆರಟ್ಟಿಗಳೂ ಈ ಭಗವತೀ ಮೂರ್ತಿಯನ್ನು ಪ್ರತಿಷ್ಠಾಪಿಸಿದ್ದಕ್ಕೆ ವರುಣದಲ್ಲೇ ಇದೀಗ ಶೋಧಿತವಾದ ಶಾಸನಸ್ಥ ಶಿಲ್ಪ ಸಾಕ್ಷಿಯಾಗಿದೆ. ಕೂಡಲೂರಿನ ದುರ್ಗಾ–ಕಾತ್ಯಾಯನೀ ಮತ್ತು ಮಹಿಷಾ ಸುರಮರ್ದಿನಿ ಶಿಲ್ಪಗಳನ್ನು ಇಲ್ಲಿ ತೌಲನಿಕ ಅಧ್ಯಯನದ ದೃಷ್ಟಿಯಿಂದ ಉಲ್ಲೇಖಿಸಬಹುದು. ಪ್ರಾಚೀನ ಕಾಲದ ಮಾತೃದೇವತೆ–ಭಗವತೀ–ಕಾತ್ಯಾಯನಿ ಬರಬರುತ್ತ ಮಹಿಷಾಸುರಮರ್ದಿನಿ – ಚಾಮುಂಡಿಯಾಗಿ – ಮುಂದೆ ಕರ್ನಾಟಕ ರಾಜರಾಜೇಶ್ವರಿಯಾಗಿ ಜನಮನದಲ್ಲಿ ನೆಲೆಸಿದ್ದಷ್ಟೆ ಅಲ್ಲ, ಒಟ್ಟೂ ನಾಡವರನ್ನು ಒಂದುಗೂಡಿ ಸುವ ಆದಿಶಕ್ತಿಯಾಗಿ ನಮ್ಮನ್ನು ರಕ್ಷಿಸುತ್ತಿದ್ದಾಳೆ ವರುಣದಲ್ಲಿ ಪತ್ತೆಯಾದ ಈ ಶಾಸನಸ್ಥ ಶಿಲ್ಪ ಈ ಪ್ರಕ್ರಿಯೆಯಲ್ಲಿರುವ ಒಂದು ಅಪೂರ್ವ ನಿದರ್ಶನ ವಾಗಿದೆ.

ಅಲ್ಲದೆ, ಎಂಟನೆಯ ಶತಮಾನದ ಗಂಗರ ಕಾಲದಲ್ಲಿ ಎಡತೊರೆನಾಡು–ಸಾವಿರ ಪ್ರದೇಶದಲ್ಲಿ ಕೂಡ ಲೂರನ್ನು ರಾಜಧಾನಿಯಾಗಿ ಮಾಡಿಕೊಂಡು ಆಳಿದ ಆರಟ್ಟಿ ಅರಸರು ಅವರಲ್ಲೂ ಚೋತ್ತಮಾನ್, ತೀರಾರ್, ಎಳಾ ಮುಂತಾದವರು ಸಾಮಂತರಾಗಿ ಎದ್ದುಕಾಣು ತ್ತಾರೆ. ಅವರತ್ತ ನಾವೀಗ ಪ್ರತ್ಯೇಕವಾಗಿ ಗಮನ ಹರಿಸ ಬೇಕಾಗಿದೆ. ಅಷ್ಟೇ ಕುತೂಹಲದಿಂದ ಅನುಲಕ್ಷಿಸ ಬೇಕಾದ್ದು, ಆ ಆರಟ್ಟಿಗಳಲ್ಲಿ ಒಬ್ಬನಾದ ಶ್ರೀ ಎಳಾ ವರುಣದಲ್ಲಿ ಭಗವತೀ ಆಲಯವನ್ನು ಕಟ್ಟಿಸಿ, ಭೂಮಿ ದಾನ ನೀಡಿದ್ದು, ಮೊದಲ ಬಾರಿಗೆ ಈಚೆಗೆ ಶೋಧಿತ ವಾದ ಈ ಶಾಸನದಿಂದ ಇದು ಸ್ಪಷ್ಟವಾಗುತ್ತದೆ.

# ಗ್ರಂಥ ಋಣ

1 ಎಕ VI, ಮೈಸೂರು (೧೯೭೬)

2 ರಘುನಾಥಭಟ್ ಎಚ್. ಆರ್., ವರುಣ, ಮೈಸೂರು, ೧೯೯೧

3 ದೇವರಕೊಂಡಾರೆಡ್ಡಿ, ಗಂಗರ ಶಿಲ್ಪಕಲೆ, ಬೆಂಗಳೂರು, ೧೯೯೪

4 " ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಬೆಂಗಳೂರು, ೧೯೯೪

5 ಸೂರ್ಯನಾಥಕಾಮತ್ ಯು., (ಸಂ). ಕರ್ನಾಟಕ ಸ್ಟೇಟ್ ಗೆಝೆಟಿಯರ್, ಸಂ II, ಬೆಂಗಳೂರು ೧೯೮೩

6 " ಮೈಸೂರು ಡಿಸ್ಟ್ರಿಕ್ಟ್, ಗೆಝೆಟಿಯರ್, ಬೆಂಗಳೂರು, ೧೯೮೮

7 ಶೇಕ್ ಅಲಿ, ಹಿಸ್ಟರಿ ಆಫ್ ಗಂಗಾಸ್ ಆಫ್ ತಲಕಾಡ್, ಮೈಸೂರು, ೧೯೭೬

8 ರಮೇಶ್ ಕೆ.ವಿ., ಇನ್ಸ್ಕ್ರಿಪ್ಶನ್ಸ್ ಆಫ್ ವೆಸ್ಟರ್ನ್ ಗಂಗಾಸ್, ನವದೆಹಲಿ, ೧೯೮೪

9 ಶರ್ಮ ಐ.ಕೆ., ಟೆಂಪಲ್ಸ್ ಆಫ್ ದಿ ಗಂಗಾಸ್ ಆಫ್ ಕರ್ನಾಟಕ, ನವದೆಹಲಿ, ೧೯೯೨